# ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 1113 |
| ಸದಸ್ಯರ ಹೆಸರು | ಶ್ರೀ ಕೆ.ಟಿ. ಶ್ರೀಕಂಠೇಗೌಡ (ಪದವೀಧರರ ಕ್ಷೇತ್ರ) |
| ಉತ್ತರಿಸಬೇಕಾದ ದಿನಾಂಕ | 22.12.2021 |
| ಉತ್ತರಿಸುವ ಸಚಿವರು | ಕಂದಾಯ ಸಚಿವರು |

| ಕ್ರ. ಸಂ. | ಪ್ರಶ್ನೆ ವಿವರ | ಉತ್ತರ |
|---|---|---|
| ಅ) | ಭೂಮಾಪನ ಕಂದಾಯ ವ್ಯವಸ್ಥೆ ಮತ್ತು ಭೂದಾಖಲೆಗಳ ಇಲಾಖೆ, ಬೆಂಗಳೂರು ಇಲ್ಲಿ ಖಾಲಿ ಇದ್ದ 1067 ಭೂಮಾಪಕರ ಹುದ್ದೆಗಳನ್ನು ನೇರ ನೇಮಕಾತಿಯಿಂದ ಭರ್ತಿ ಮಾಡಲು ಯಾವಾಗ ಅರ್ಜಿ ಕರೆಯಲಾಗಿತ್ತು; ಇದರ ಸಂಬಂಧ ಅಂತಿಮ ಆಯ್ಕೆ ಪಟ್ಟಿ, ಹೆಚ್ಚುವರಿ ಪಟ್ಟಿ ಯಾವಾಗ ಪ್ರಕಟಿಸಲಾಗಿದೆ; (ವಿವರವಾದ ಮಾಹಿತಿ ನೀಡುವುದು) | ಆಯುಕ್ತರು ಭೂಮಾಪನ ಇಲಾಖೆ ಇವರ ಅಧಿಸೂಚನೆ ಸಂಖ್ಯೆ: SSLR/EST/REC/REC-002/16-17 ದಿನಾಂಕ: 05.11.2016 ರಲ್ಲಿ ಇಲಾಖೆಯಲ್ಲಿ ಖಾಲಿ ಇದ್ದ 1067 ಭೂಮಾಪಕರ ಹುದ್ದೆಗಳನ್ನು ಭರ್ತಿ ಮಾಡಲು ಆನ್‌ಲೈನ್ ಮೂಲಕ ಅರ್ಜಿಗಳನ್ನು ಆಹ್ವಾನಿಸಲಾಗಿತ್ತು.<br>ಈ ಸಂಬಂಧ ಅಂತಿಮ ಆಯ್ಕೆ ಪಟ್ಟಿಯನ್ನು ಈ ಕೆಳಕಂಡ ದಿನಾಂಕಗಳಂದು ಪ್ರಕಟಿಸಲಾಗಿದೆ. |

| ಅಂತಿಮ ಆಯ್ಕೆ ಪಟ್ಟಿ ಪ್ರಕಟಿಸಿದ ದಿನಾಂಕ | ಅಭ್ಯರ್ಥಿಗಳ ಸಂಖ್ಯೆ |
|---|---|
| 26.02.2018 | 905 |
| 06.03.2018 | 48 |
| 13.03.2018 | 18 |
| 25.09.2018 | 23 |
| 05.10.2018 | 138 |
| ಒಟ್ಟು | 1132 |

ಅಧಿಸೂಚಿತ 1067 ಭೂಮಾಪಕರ ಹುದ್ದೆಗಳಲ್ಲಿ ಅರ್ಹರಿರುವ ಅಭ್ಯರ್ಥಿಗಳಿಗೆ ಸಿಂಧುತ್ವ ಪ್ರಮಾಣ ಪತ್ರ, ಪೊಲೀಸ್ ವರದಿ ಮತ್ತು ಅಂಗವಿಕಲ ಮೀಸಲಾತಿಯಡಿಯಲ್ಲಿ ಅರ್ಜಿ ಸಲ್ಲಿಸಿದ ಅಭ್ಯರ್ಥಿಗಳ ಅರ್ಹತೆಯನ್ನು ನಿರ್ಧರಿಸಲು ವಿಕ್ಟೋರಿಯಾ ಆಸ್ಪತ್ರೆಯ ವೈದ್ಯಕೀಯ ಮಂಡಳಿಯ ಪರೀಕ್ಷೆಗೊಳಪಡಿಸಲಾಗಿರುತ್ತದೆ. ಈ ದಾಖಲೆ/ಮಾಹಿತಿಗಳು ಸ್ವೀಕೃತಗೊಂಡಂತೆ ಹಂತ-ಹಂತವಾಗಿ ಆಯ್ಕೆ ಪಟ್ಟಿ ಪ್ರಕಟಿಸಿದ್ದು, ಅರ್ಹರಿಲ್ಲದ ಹಾಗೂ ಕರ್ತವ್ಯಕ್ಕೆ ವರದಿ ಮಾಡಿಕೊಳ್ಳದ ಅಭ್ಯರ್ಥಿಗಳ ಆಯ್ಕೆ ಮತ್ತು ನೇಮಕಾತಿಯನ್ನು ರದ್ದುಪಡಿಸಿದ ನಂತರ ಒಟ್ಟಾರೆಯಾಗಿ 986 ಅಭ್ಯರ್ಥಿಗಳಿಗೆ ನೇಮಕಾತಿ ಆದೇಶ ನೀಡಲಾಗಿದೆ.

| | | |
|---|---|---|
| ಆ) | ಈ ನೇಮಕಾತಿ ಸಂಬಂಧ ಅಂತಿಮ ಆಯ್ಕೆ ಪಟ್ಟಿ ಮತ್ತು ಹೆಚ್ಚುವರಿ ಪಟ್ಟಿಯನ್ನು ಇನ್ನೂ ಪ್ರಕಟಿಸದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಹಾಗಿದ್ದಲ್ಲಿ ಯಾವಾಗ ಪ್ರಕಟಿಸಲಾಗುವುದು; (ವಿವರವಾದ ಮಾಹಿತಿ ನೀಡುವುದು) | ಕರ್ನಾಟಕ ನಾಗರೀಕ (ಸ್ಪರ್ಧಾತ್ಮಕ ಪರೀಕ್ಷೆ ಮೂಲಕ ನೇರ ನೇಮಕಾತಿ ಮತ್ತು ಆಯ್ಕೆ) (ಸಾಮಾನ್ಯ) ನಿಯಮಾವಳಿ 2006 ರ ನಿಯಮ 8 ರಲ್ಲಿ ಮುಖ್ಯ ಮತ್ತು ಹೆಚ್ಚುವರಿ ಆಯ್ಕೆ ಪಟ್ಟಿಯನ್ನು ಆಯ್ಕೆ ಪ್ರಾಧಿಕಾರವು ಏಕಕಾಲದಲ್ಲಿಯೇ ಪ್ರಕಟಿಸಬೇಕಾಗಿರುತ್ತದೆ. ಸರ್ಕಾರದ ಸುತ್ತೋಲೆ ಸಂಖ್ಯೆ: ಸಿಆಸುಇ 76 ಸೆನೆನಿ 2019 ದಿನಾಂಕ: 15.02.2018 ರನ್ವಯ ಆಯ್ಕೆ ಪಟ್ಟಿಯು ಜಾರಿಯಲ್ಲಿರುವ ಅವಧಿಯು 01 ವರ್ಷವಾಗಿದ್ದು ನೇಮಕಾತಿ ಪ್ರಾಧಿಕಾರವು ನೇಮಕಾತಿ ಆದೇಶವನ್ನು ಆಯ್ಕೆಪಟ್ಟಿ ಪ್ರಕಟಗೊಂಡ 01 ವರ್ಷದೊಳಗಾಗಿ ನೀಡಲು ಕ್ರಮ ಕೈಗೊಳ್ಳಬೇಕಾಗಿರುತ್ತದೆ. ಆದರೆ ಈ ನೇಮಕಾತಿ ಪ್ರಕ್ರಿಯೆಯಲ್ಲಿ ಈ ರೀತಿಯ ಕ್ರಮ ಅನುಸರಿಸಿಲ್ಲವಾದ್ದರಿಂದ ಅವಧಿಯನ್ನು ವಿಸ್ತರಿಸಿ ನೇಮಕಾತಿ ಪ್ರಕ್ರಿಯೆಯನ್ನು ಮುಂದುವರೆಸಲು ನಿಯಮಗಳಲ್ಲಿ ಅವಕಾಶವಿರುವುದಿಲ್ಲವೆಂದು ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆಯು ಅಭಿಪ್ರಾಯಿಸಿರುತ್ತದೆ. ಈ ನೇಮಕಾತಿ ಪ್ರಕ್ರಿಯೆಯಲ್ಲಿ ಮುಖ್ಯ ಆಯ್ಕೆ ಪಟ್ಟಿಯನ್ನು ಹಂತಹಂತವಾಗಿ ಪ್ರಕಟಿಸಿದ್ದು ಹೆಚ್ಚುವರಿ ಆಯ್ಕೆ ಪಟ್ಟಿಯನ್ನು ಪ್ರಕಟಿಸಿರುವುದಿಲ್ಲ. |
| ಇ) | ಈ ನೇಮಕಾತಿ ಪ್ರಕ್ರಿಯೆಯು ವಿಳಂಬವಾಗಿರುವುದಕ್ಕೆ ಅಭ್ಯರ್ಥಿಗಳು ಕಾರಣರಾಗಿಲ್ಲವೆಂದು ದಿನಾಂಕಃ 14.06.2021 ರಂದು ಆಯುಕ್ತರು, ಭೂಮಾಪನ ಇಲಾಖೆ, ಸರ್ಕಾರಕ್ಕೆ ಪತ್ರ ಬರೆದಿರುವುದು ನಿಜವೇ; (ಪತ್ರದ ಪ್ರತಿಯನ್ನು ನೀಡುವುದು) | ಹೌದು.<br>ಪತ್ರದ ಪ್ರತಿಯನ್ನು **ಅನುಬಂಧ-1** ರಲ್ಲಿ ನೀಡಿದೆ. |
| ಈ) | ರ್‍ಯಾಂಕ್‌ನಲ್ಲಿ ಹಿರಿಯವರಾಗಿದ್ದು ಅಗತ್ಯ ದಾಖಲೆಗಳನ್ನು ಸ್ವೀಕರಿಸಿ ಆಯ್ಕೆ ಪಟ್ಟಿ ಪ್ರಕಟಿಸಿದ ಎಷ್ಟು ಅಭ್ಯರ್ಥಿಗಳಿಗೆ ನೇಮಕಾತಿ ಆದೇಶ ನೀಡಬೇಕಾಗಿರುತ್ತದೆ; ವಿವರವಾಗಿ ಅಭ್ಯರ್ಥಿ ಹೆಸರು, ವಿಳಾಸ, ಆಯ್ಕೆಗೊಂಡ ಬಿಂದುಗಳೊಂದಿಗೆ ವಿವರವಾದ ಮಾಹಿತಿ ನೀಡುವುದು; | ಅಭ್ಯರ್ಥಿಗಳಿಗೆ ನೇಮಕಾತಿ ಆದೇಶ ನೀಡಬೇಕಾಗಿದ್ದ 38 ಅಭ್ಯರ್ಥಿಗಳ ವಿವರವಾದ ಮಾಹಿತಿಯನ್ನು **ಅನುಬಂಧ-2** ರಲ್ಲಿರಿಸಿದೆ. |

| | | |
|---|---|---|
| ಉ) | ಈ ಅಭ್ಯರ್ಥಿಗಳಿಗೆ ಸರ್ಕಾರವು ಸಮಾನ ನೈಸರ್ಗಿಕ ನ್ಯಾಯತತ್ವದಡಿ ಯಾವ ಕಾಲಮಿತಿಯಲ್ಲಿ ನೇಮಕಾತಿ ಆದೇಶ ನೀಡಿ ನ್ಯಾಯ ಒದಗಿಸಲಾಗುವುದು? | ಕರ್ನಾಟಕ ನಾಗರೀಕ (ಸ್ಪರ್ಧಾತ್ಮಕ ಪರೀಕ್ಷೆ ಮೂಲಕ ನೇರ ನೇಮಕಾತಿ ಮತ್ತು ಆಯ್ಕೆ) (ಸಾಮಾನ್ಯ) ನಿಯಮಾವಳಿ 2006 ರ ನಿಯಮ 8 ರಲ್ಲಿ ಮುಖ್ಯ ಮತ್ತು ಹೆಚ್ಚುವರಿ ಆಯ್ಕೆ ಪಟ್ಟಿಯನ್ನು ಆಯ್ಕೆ ಪ್ರಾಧಿಕಾರವು ಏಕಕಾಲದಲ್ಲಿಯೇ ಪ್ರಕಟಿಸಬೇಕಾಗಿರುತ್ತದೆ. ಸರ್ಕಾರದ ಸುತ್ತೋಲೆ ಸಂಖ್ಯೆ: ಸಿಆಸುಇ 76 ಸೆನೆನಿ 2019, ದಿನಾಂಕ: 15.02.2018 ರನ್ವಯ ಆಯ್ಕೆ ಪಟ್ಟಿಯು ಜಾರಿಯಲ್ಲಿರುವ ಅವಧಿಯು 01 ವರ್ಷವಾಗಿದ್ದು ನೇಮಕಾತಿ ಪ್ರಾಧಿಕಾರವು ನೇಮಕಾತಿ ಆದೇಶವನ್ನು ಆಯ್ಕೆಪಟ್ಟಿ ಪ್ರಕಟಗೊಂಡ 01 ವರ್ಷದೊಳಗಾಗಿ ನೀಡಲು ಕ್ರಮ ಕೈಗೊಳ್ಳಬೇಕಾಗಿರುತ್ತದೆ. ಆದರೆ ಈ ನೇಮಕಾತಿ ಪ್ರಕ್ರಿಯೆಯಲ್ಲಿ ಈ ರೀತಿಯ ಕ್ರಮ ಅನುಸರಿಸಿಲ್ಲವಾದ್ದರಿಂದ ಅವಧಿಯನ್ನು ವಿಸ್ತರಿಸಿ ನೇಮಕಾತಿ ಪ್ರಕ್ರಿಯೆಯನ್ನು ಮುಂದುವರೆಸಲು ನಿಯಮಗಳಲ್ಲಿ ಅವಕಾಶವಿರುವುದಿಲ್ಲವೆಂದು ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆಯು ಅಭಿಪ್ರಾಯಿಸಿರುತ್ತದೆ. |

ಸಂ. ಕಂಇ 232 ಎಸ್‌ಎಸ್‌ಸಿ 2021

(ಆರ್.ಅಶೋಕ)

ಕಂದಾಯ ಸಚಿವರು

ಅನುಬಂಧ-1 LCQ-1113

ಕರ್ನಾಟಕ ಸರ್ಕಾರ

ಆಯುಕ್ತರ ಕಛೇರಿ,
ಭೂಮಾಪನ ಕಂದಾಯ ವ್ಯವಸ್ಥೆ ಮತ್ತು
ಭೂದಾಖಲೆಗಳ ಇಲಾಖೆ, ಬೆಂಗಳೂರು,
ಕೆ.ಆರ್.ವೃತ್ತ, ಬೆಂಗಳೂರು – 560 001.
ದೂರವಾಣಿ : 91-080-22212408,
ಫ್ಯಾಕ್ಸ್ : 91-080-22277528

ಸಂ. SSLR/REC/REC-002/2016-17. ದಿನಾಂಕ: 14.06.2021.
(ಅಡಕ-ಟಿ1 ಮಾತ್ರ)

ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು,
ಕಂದಾಯ ಇಲಾಖೆ,
ಬಹುಮಹಡಿಗಳ ಕಟ್ಟಡ,
ಬೆಂಗಳೂರು.

ಮಾನ್ಯರೆ,

ವಿಷಯ: ಇಲಾಖೆಯಲ್ಲಿ ಖಾಲಿ ಇದ್ದ 1067 ಭೂಮಾಪಕರ ಹುದ್ದೆಗಳನ್ನು ನೇರ ನೇಮಕಾತಿಯಿಂದ ಭರ್ತಿ ಮಾಡುತ್ತಿರುವ ಕ್ರಮದ ಕುರಿತು ಸ್ಪಷ್ಟೀಕರಣ ಕೋರುವ ಬಗ್ಗೆ.

ಉಲ್ಲೇಖ:
1. ಸರ್ಕಾರದ ಸುತ್ತೋಲೆ ಸಂಖ್ಯೆ: ಸಿಆಸುಇ 76 ಸೇನೆನಿ 2019 ದಿನಾಂಕ: 15.02.2018.
2. ಈ ಕಛೇರಿಯ ಸಮಸಂಖ್ಯೆಯ ಪತ್ರ ದಿನಾಂಕ: 08.11.2019.
3. ಸರ್ಕಾರದ ಪತ್ರ ಸಂಖ್ಯೆ: ಕಂಇ 52 ಎಫ್.ಎಲ್.ಆರ್ 2019 ದಿನಾಂಕ: 06.10.2020.
4. ಕರ್ನಾಟಕ ಆಡಳಿತ ನ್ಯಾಯ ಮಂಡಳಿ, ಬೆಂಗಳೂರು ರವರ ಅರ್ಜಿ ಸಂಖ್ಯೆ: 3054 ರಿಂದ 3056/2020 ಮತ್ತು 3506 ರಿಂದ 2512/2020 ರ ಆದೇಶ ದಿನಾಂಕ: 01.04.2021.
5. ಅಭ್ಯರ್ಥಿಗಳ ಮನವಿ ದಿನಾಂಕ: 07.04.2021.
6. ಸರ್ಕಾರದ ಪತ್ರ ಸಂಖ್ಯೆ: ಕಂಇ 03 ಎಫ್.ಎಲ್.ಆರ್ 2021 ದಿನಾಂಕ: 29.03.2021 ರ ಇ ನಂಬರ್ 2125437.
7. ಸರ್ಕಾರದ ಪತ್ರ ಸಂಖ್ಯೆ: ಕಂಇ 06 ಎಸ್.ಎಸ್.ಸಿ. 2020 ದಿನಾಂಕ: 23.12.2020 ರ ಇ ನಂಬರ್ 1606476.

19/6/21 ರಂದು ರವಾನಿಸಿದೆ.

*****

ಇಲಾಖೆಯಲ್ಲಿ ಖಾಲಿ ಇದ್ದ 1067 ಭೂಮಾಪಕರ ಹುದ್ದೆಗಳನ್ನು ನೇರ ನೇಮಕಾತಿಯಿಂದ ಭರ್ತಿ ಮಾಡಲು ದಿನಾಂಕ: 05.11.2016 ರಲ್ಲಿ ಅಧಿಸೂಚನೆ ಹೊರಡಿಸಿ ಆನ್‌ಲೈನ್ ಮೂಲಕ ಅರ್ಜಿಗಳನ್ನು ಆಹ್ವಾನಿಸಲಾಯಿತು. ನಂತರ ಅರ್ಹ

ಅರ್ಜಿಗಳನ್ನು ಸಲ್ಲಿಸಿದ ಅಭ್ಯರ್ಥಿಗಳಿಗೆ ದಿನಾಂಕ: 16.07.2017 ರಂದು ಆನ್ ಲೈನ್ ಮೂಲಕ ಸ್ಪರ್ಧಾತ್ಮಕ ಪರೀಕ್ಷೆಯನ್ನು ನಡೆಸಲಾಗಿದೆ. ಸದರಿ ಪರೀಕ್ಷೆಯಲ್ಲಿ ಪಡೆದ ಅಂಕಗಳ ಆಧಾರದ ಮೇರೆಗೆ ಮೆರಿಟ್ ಪಟ್ಟಿಯನ್ನು ದಿನಾಂಕ: 14.08.2017 ರಂದು ಪ್ರಕಟಿಸಲಾಯಿತು. ಮೆರಿಟ್ ಪಟ್ಟಿಯಲ್ಲಿನ RANK ಮತ್ತು ಮೀಸಲಾತಿ ವರ್ಗೀಕರಣದಂತೆ 1 : 1.5 ಅನುಪಾತದಲ್ಲಿ ಮೂಲ ದಾಖಲೆಗಳ ಪರಿಶೀಲನೆಗೆ ಅಭ್ಯರ್ಥಿಗಳನ್ನು ಆಹ್ವಾನಿಸಿ ದಿನಾಂಕ: 02.01.2018 ರಿಂದ 04.01.2018 ರವರೆಗೆ ದಾಖಲೆಗಳ ಪರಿಶೀಲನಾ ಕಾರ್ಯವನ್ನು ಕೈಗೊಳ್ಳಲಾಯಿತು.

ಅಧಿಸೂಚನೆಯಂತೆ 1067 ಭೂಮಾಪಕರ ಹುದ್ದೆಗಳಿಗೆ ಮತ್ತು ಶೇಕಡಾ 10 ರಷ್ಟು ಹೆಚ್ಚುವರಿ ಪಟ್ಟಿಗಳಿಗೆ ಅರ್ಹರಿರುವ ಅಭ್ಯರ್ಥಿಗಳಿಗೆ ವರ್ಗೀಕರಣ ಮತ್ತು ಮೀಸಲಾತಿಯಂತೆ ಲಭ್ಯವಾಗುವ ಬಿಂದುಗಳನ್ನು ಆಧರಿಸಿ ಸಿಂಧುತ್ವ ಪ್ರಮಾಣ ಪತ್ರ ಮತ್ತು ಪೊಲೀಸ್ ವರದಿಗಾಗಿ ಸಕ್ಷಮ ಪ್ರಾಧಿಕಾರಗಳೊಂದಿಗೆ ಪತ್ರ ವ್ಯವಹರಿಸಿ, ಅಂಗವಿಕಲ ಮೀಸಲಾತಿಯಡಿಯಲ್ಲಿ ಅರ್ಜಿ ಸಲ್ಲಿಸಿದ ಅಭ್ಯರ್ಥಿಗಳ ಅರ್ಹತೆಯನ್ನು ನಿರ್ಧರಿಸಲು ವಿಕ್ಟೋರಿಯಾ ಆಸ್ಪತ್ರೆಯ ವೈದ್ಯಕೀಯ ಮಂಡಳಿಯ ಪರೀಕ್ಷೆಗೊಳಪಡಿಸಲಾಯಿತು.

ಉಲ್ಲೇಖ (1) ರ ಸುತ್ತೋಲೆಯನ್ವಯ ಸಿಂಧುತ್ವ ಪ್ರಮಾಣ ಪತ್ರ ಮತ್ತು ಪೊಲೀಸ್ ವರದಿ ಸ್ವೀಕರಿಸಿದ 910 ಅಭ್ಯರ್ಥಿಗಳು ಅರ್ಹರಿರುವ ಬಿಂದುಗಳಿಗೆ ತಾತ್ಕಾಲಿಕ ಆಯ್ಕೆ ಪಟ್ಟಿಯನ್ನು ದಿನಾಂಕ:17.02.2018 ರಂದು ಪ್ರಕಟಿಸಲಾಯಿತು. ಸದರಿ ಪಟ್ಟಿಗೆ ಸ್ವೀಕರಿಸಿದ ಆಕ್ಷೇಪಣೆಗಳಿಗನುಸಾರ 905 ಅಭ್ಯರ್ಥಿಗಳ ಆಯ್ಕೆಯನ್ನು ಅಂತಿಮಗೊಳಿಸಿ ಅಂತಿಮ ಆಯ್ಕೆ ಪಟ್ಟಿಯನ್ನು ದಿನಾಂಕ: 26.02.2018 ರಂದು ಪ್ರಕಟಿಸಿ, ದಿನಾಂಕ: 27.02.2018 ರಂದು ನೇಮಕಾತಿ ಆದೇಶವನ್ನು ನೀಡಲಾಗಿದೆ. ವೈದ್ಯಕೀಯ ಮಂಡಳಿಯ ವರದಿಯನುಸಾರ ಅರ್ಹತೆ ಹೊಂದಿರುವ ಅಂಗವಿಕಲರಿಗೆ ಹಾಗೂ ದಿನಾಂಕ: 17.02.2018 ರ ನಂತರ ಸಿಂಧುತ್ವ ಪ್ರಮಾಣ ಪತ್ರ ಮತ್ತು ಪೊಲೀಸ್ ವರದಿ ಸ್ವೀಕರಿಸಿದ ಅಭ್ಯರ್ಥಿಗಳಿಗೆ ಸಂಬಂಧಿಸಿದಂತೆ ದಿನಾಂಕ:23.02.2018 ರಂದು 49 ಅಭ್ಯರ್ಥಿಗಳು ಅರ್ಹರಿರುವ ಬಿಂದುಗಳಿಗೆ ತಾತ್ಕಾಲಿಕ ಆಯ್ಕೆ ಪಟ್ಟಿಯನ್ನು ಪ್ರಕಟಿಸಲಾಯಿತು. ದಿನಾಂಕ:23.02.2018 ರ ತಾತ್ಕಾಲಿಕ ಆಯ್ಕೆ ಪಟ್ಟಿಗೆ ಸಂಬಂಧಿಸಿದಂತೆ ಸ್ವೀಕರಿಸಲಾದ ಆಕ್ಷೇಪಣೆಗಳನ್ನು ಪರಿಶೀಲಿಸಿ 48 ಅಭ್ಯರ್ಥಿಗಳ ಆಯ್ಕೆಯನ್ನು ಅಂತಿಮಗೊಳಿಸಿ ಅಂತಿಮ ಆಯ್ಕೆ ಪಟ್ಟಿಯನ್ನು ದಿನಾಂಕ: 6.03.2018 ರಂದು ಪ್ರಕಟಿಸಿ, ಸದರಿ ದಿನದಂದೇ ನೇಮಕಾತಿ ಆದೇಶವನ್ನು ನೀಡಲಾಗಿದೆ. ದಿನಾಂಕ: 23.02.2018 ರಿಂದ 06.03.2018 ರ ವರೆಗೆ ಸಿಂಧುತ್ವ ಪ್ರಮಾಣ ಪತ್ರ ಮತ್ತು ಪೊಲೀಸ್ ವರದಿ ಸ್ವೀಕರಿಸಿದ 19 ಅಭ್ಯರ್ಥಿಗಳು ಅರ್ಹರಿರುವ ಬಿಂದುಗಳಿಗೆ ತಾತ್ಕಾಲಿಕ ಆಯ್ಕೆ ಪಟ್ಟಿಯನ್ನು ದಿನಾಂಕ: 06.03.2018 ರಂದು ಪ್ರಕಟಿಸಲಾಯಿತು. ಸದರಿ ಪಟ್ಟಿಗೆ ಸಂಬಂಧಿಸಿದಂತೆ ಸ್ವೀಕರಿಸಿದ ಆಕ್ಷೇಪಣೆಗಳನ್ನು ಆಧರಿಸಿ 18 ಅಭ್ಯರ್ಥಿಗಳ ಆಯ್ಕೆಯನ್ನು ಅಂತಿಮಗೊಳಿಸಿ, ಸದರಿ ದಿನದಂದೇ ನೇಮಕಾತಿ ಆದೇಶವನ್ನು ನೀಡಲಾಗಿದೆ. ಈ 03 ನೇಮಕಾತಿ ಆದೇಶಗಳನ್ನು ಪಡೆದ ಎಲ್ಲಾ ಅಭ್ಯರ್ಥಿಗಳನ್ನು ವೃತ್ತಿ ಬುನಾದಿ ತರಬೇತಿಗಾಗಿ ತರಬೇತಿ ಸಂಸ್ಥೆಗಳಿಗೆ ನೇಮಕ ಮಾಡಲಾಗಿದೆ. ನೇಮಕಾತಿ ಆದೇಶ ಪಡೆದ 969 ಅಭ್ಯರ್ಥಿಗಳ ಪೈಕಿ 118 ಅಭ್ಯರ್ಥಿಗಳು ಕರ್ತವ್ಯಕ್ಕೆ ಹಾಜರಾಗಿರುವುದಿಲ್ಲ. ಹಾಜರಾದ 851 ಬಿಂದುಗಳು ಭರ್ತಿಯಾಗಿದೆ. ಕರ್ತವ್ಯಕ್ಕೆ ಹಾಜರಾಗದ 118 ಅಭ್ಯರ್ಥಿಗಳಿಗೆ ಅಂತಿಮ ನೋಟೀಸ್ ನೀಡಿ ನಂತರವೂ ಕರ್ತವ್ಯಕ್ಕೆ ಹಾಜರಾಗದ ಕಾರಣ, ದಿನಾಂಕ:02.07.2018 ರಂದು ನೇಮಕಾತಿಯನ್ನು ರದ್ದುಪಡಿಸಿ ಆದೇಶಿಸಿದೆ. ಸಿಂಧುತ್ವ ಪ್ರಮಾಣ ಪತ್ರ ಮತ್ತು ಪೊಲೀಸ್ ವರದಿ ನೀಡಲು ಸಕ್ಷಮ ಪ್ರಾಧಿಕಾರಗಳಿಗೆ ಅಗತ್ಯವಿರುವ ದಾಖಲೆಗಳನ್ನು ಸಲ್ಲಿಸದ ಅಭ್ಯರ್ಥಿಗಳಿಗೆ ಅಂತಿಮ ನೋಟೀಸ್ ಜಾರಿ ಮಾಡಿ ನೇಮಕಾತಿಯಲ್ಲಿ ಇಚ್ಛೆ ಹೊಂದಿದಲ್ಲಿ ಲಿಖಿತವಾಗಿ ಮನವಿ ಸಲ್ಲಿಸಲು ಸೂಚಿಸಲಾಗಿತ್ತು. ಆದರೂ ಯಾವುದೇ ರೀತಿ ಸ್ಪಂದಿಸದೇ ನೇಮಕಾತಿ ಪ್ರಕ್ರಿಯೆಯಲ್ಲಿ ಆಸಕ್ತಿ ತೋರದ 32 ಅಭ್ಯರ್ಥಿಗಳನ್ನು ದಿನಾಂಕ: 02.07.2018 ರಂದು ನೇಮಕಾತಿಗೆ ಪರಿಗಣಿಸುವುದಿಲ್ಲವೆಂದು ಆದೇಶಿಸಿದೆ. ದಿನಾಂಕ: 06.03.2018 ರಿಂದ 02.07.2018 ರವರಗೆ ಸಿಂಧುತ್ವ ಪ್ರಮಾಣ ಪತ್ರ ಮತ್ತು ಪೊಲೀಸ್ ವರದಿ ಸ್ವೀಕರಿಸಿದ 23 ಅಭ್ಯರ್ಥಿಗಳ ಅರ್ಹ ಬಿಂದುವಿಗೆ ತಾತ್ಕಾಲಿಕ ಆಯ್ಕೆಪಟ್ಟಿಯನ್ನು ದಿನಾಂಕ: 02.07.2018 ರಂದು ಪ್ರಕಟಿಸಲಾಗಿದೆ. ಸದರಿ ಆಯ್ಕೆಪಟ್ಟಿಗೆ

ಸಂಬಂಧಿಸಿದಂತೆ ಸ್ವೀಕರಿಸಿದ ಆಕ್ಷೇಪಣೆಗಳನ್ನು ಪರಿಶೀಲಿಸಿ 23 ಅಭ್ಯರ್ಥಿಗಳ ಆಯ್ಕೆಯನ್ನು ಅಂತಿಮಗೊಳಿಸಿ ದಿನಾಂಕ: 25.09.2018 ರಂದು ಅಂತಿಮ ಆಯ್ಕೆಪಟ್ಟಿಯನ್ನು ಪ್ರಕಟಿಸಲಾಗಿದೆ. ಕರ್ತವ್ಯಕ್ಕೆ ಹಾಜರಾಗದೆ ಭರ್ತಿಯಾಗದ ಬಿಂದುವಿಗೆ ಮತ್ತು ಅಗತ್ಯ ದಾಖಲೆಗಳನ್ನು ಸಕ್ಷಮ ಪ್ರಾಧಿಕಾರಕ್ಕೆ ಸಲ್ಲಿಸದ ಕಾರಣ ಆಯ್ಕೆಗೆ ಪರಿಗಣಿಸದ ಅಭ್ಯರ್ಥಿಗಳಿಗಾಗಿ ಕಾಯ್ದಿರಿಸಿದ ಬಿಂದುಗಳನ್ನು ಭರ್ತಿ ಮಾಡಲು ಸಿಂಧುತ್ವ ಪ್ರಮಾಣ ಪತ್ರ ಮತ್ತು ಪೊಲೀಸ್ ವರದಿ ಸ್ವೀಕರಿಸಿರುವ 145 ಅಭ್ಯರ್ಥಿಗಳ ತಾತ್ಕಾಲಿಕ ಆಯ್ಕೆಪಟ್ಟಿಯನ್ನು ದಿನಾಂಕ: 24.09.2018 ರಂದು ಪ್ರಕಟಿಸಲಾಗಿದೆ. ಸದರಿ ಪಟ್ಟಿಗೆ ಸ್ವೀಕರಿಸಿರುವ ಆಕ್ಷೇಪಣೆಗಳನ್ನು ಪರಿಶೀಲಿಸಿ 138 ಅಭ್ಯರ್ಥಿಗಳ ಆಯ್ಕೆಯನ್ನು ಅಂತಿಮಗೊಳಿಸಿ ದಿನಾಂಕ: 05.10.2018 ರಂದು ಅಂತಿಮ ಆಯ್ಕೆಪಟ್ಟಿಯನ್ನು ಪ್ರಕಟಿಸಿದೆ. ದಿನಾಂಕ: 25.09.2018 ರ ಮತ್ತು 05.10.2018 ರಂದು ಪ್ರಕಟಿಸಿದ ಅಂತಿಮ ಆಯ್ಕೆಪಟ್ಟಿಯಲ್ಲಿನ ಅಭ್ಯರ್ಥಿಗಳಿಗೆ ದಿನಾಂಕ: 05.10.2018 ರಂದು ನೇಮಕಾತಿ ಆದೇಶವನ್ನು ನೀಡಲಾಗಿದೆ. ಅರ್ಜಿಯಲ್ಲಿ ಮಹಿಳೆ ಎಂದು ದಾಖಲಿಸಿದ ಕಾರಣದಿಂದ ಆಯ್ಕೆಗೊಂಡಿದ್ದ RANK NO-4928 ರ ಅಭ್ಯರ್ಥಿಯ ಆಯ್ಕೆ ಮತ್ತು ನೇಮಕಾತಿಯನ್ನು ದಿನಾಂಕ: 23.10.2018 ರಂದು ರದ್ದುಪಡಿಸಿದೆ. ದಿನಾಂಕ: 05.10.2018 ರಂದು ನೀಡಲಾದ ನೇಮಕಾತಿ ಆದೇಶದಂತೆ ಕರ್ತವ್ಯಕ್ಕೆ ಹಾಜರಾಗದ 27 ಅಭ್ಯರ್ಥಿಗಳಿಗೆ ಅಂತಿಮ ನೋಟೀಸ್ ನೀಡಲಾದರೂ ಹಾಜರಾಗದ ಕಾರಣ ದಿನಾಂಕ: 23.05.2019 ರಂದು ಇವರುಗಳ ನೇಮಕಾತಿ ಆದೇಶವನ್ನು ರದ್ದುಪಡಿಸಿದೆ.

ಮುಖ್ಯ ಪಟ್ಟಿ ಪೂರ್ಣಗೊಳ್ಳದ ಕಾರಣ ಹೆಚ್ಚುವರಿ ಪಟ್ಟಿಯನ್ನು ಮತ್ತು ಅರ್ಹತೆ ಹೊಂದದ ಅಭ್ಯರ್ಥಿಗಳ ತಿರಸ್ಕೃತ ಪಟ್ಟಿಯನ್ನು ಪ್ರಕಟಿಸಿರುವುದಿಲ್ಲ. ಈ ಮೇಲಿನ ಎಲ್ಲಾ ಪ್ರಕ್ರಿಯೆ ಪೂರ್ಣಗೊಂಡ ನಂತರ 81 ಬಿಂದುಗಳು ಭರ್ತಿಯಾಗದೆ ಖಾಲಿ ಇರುತ್ತವೆ. ಇವುಗಳಲ್ಲಿ 32 ಬಿಂದುಗಳು ಅಂಗವಿಕಲರಿಗೆ ಮೀಸಲಿರಿಸಿದ ಬಿಂದುಗಳಾಗಿರುತ್ತವೆ. ನಿರ್ದಿಷ್ಟ ಅಂಗವಿಕಲ ಮೀಸಲಾತಿಗೆ ಸಂಬಂಧಿಸಿದಂತೆ ಅರ್ಹತೆ ಹೊಂದಿದ ಅಭ್ಯರ್ಥಿಗಳು ಲಭ್ಯವಿಲ್ಲದಿದ್ದಲ್ಲಿ ಇತರೆ ಅಂಗವಿಕಲತೆ ಹೊಂದಿದ ಈ ಹುದ್ದೆಗೆ ಅನ್ವಯಿಸುವ ಮೀಸಲಾತಿಗೆ ಒಳಪಡುವ ಅರ್ಹ ಅಂಗವಿಕಲ ಅಭ್ಯರ್ಥಿಗಳನ್ನು ಭರ್ತಿ ಮಾಡಲು ಅವಕಾಶವಿರುತ್ತದೆ. ಮೂಲ ದಾಖಲೆಗಳ ಪರಿಶೀಲನೆಗೊಂಡು ವೈದ್ಯಕೀಯ ಮಂಡಳಿಯಂತೆ ಅಗತ್ಯ ದಾಖಲೆಗಳನ್ನು ಸ್ವೀಕರಿಸಿರುವ 06 ಅಭ್ಯರ್ಥಿಗಳು (ಚಲನ-ವಲನ ಅಂಗವಿಕಲರು) ಲಭ್ಯವಿರುತ್ತಾರೆ. ಉಳಿದ 49 ಬಿಂದುಗಳಿಗೆ ಮೂಲ ದಾಖಲೆಗಳ ಪರಿಶೀಲನೆಗೊಂಡು ಈವರೆಗೂ ಆಯ್ಕೆ ಹೊಂದಿರದ ಅಭ್ಯರ್ಥಿಗಳು ಲಭ್ಯವಿರುತ್ತಾರೆ. ಆದರೆ ಇವರುಗಳಲ್ಲಿ 10 ಅಭ್ಯರ್ಥಿಗಳ ಪೊಲೀಸ್ ವರದಿ 01 ಅಭ್ಯರ್ಥಿಯ ಸಿಂಧುತ್ವ ಪ್ರಮಾಣ ಪತ್ರ, 05 ಅಭ್ಯರ್ಥಿಗಳಿಗೆ ಸಂಬಂಧಿಸಿದಂತೆ ಸಿಂಧುತ್ವ ಪ್ರಮಾಣ ಪತ್ರ ಮತ್ತು ಪೊಲೀಸ್ ವರದಿ ಪಡೆಯಬೇಕಾಗುತ್ತದೆ.

ಭೂಮಾಪಕರ ನೇಮಕಾತಿಗೆ ಸಂಬಂಧಿಸಿದಂತೆ ಆಯ್ಕೆ ಪಟ್ಟಿ ಮತ್ತು ನೇಮಕಾತಿ ಆದೇಶ ಪಡೆದ ಅಭ್ಯರ್ಥಿಗಳ ಅಂಕಿ ಅಂಶಗಳ ವಿವರ ಕೆಳಗಿನಂತಿರುತ್ತದೆ.

| ಕ್ರ ಸಂ | ತಾತ್ಕಾಲಿಕ ಪಟ್ಟಿ | | ಅಂತಿಮ ಪಟ್ಟಿ | | ನೇಮಕಾತಿ ಆದೇಶ ನೀಡಿದ | | ಆಯ್ಕೆ ಮತ್ತು ನೇಮಕಾತಿ ರದ್ದುಪಡಿಸಿದ | | ಷರಾ |
|---|---|---|---|---|---|---|---|---|---|
| | ಪ್ರಕಟ ಗೊಂಡ ದಿನಾಂಕ | ಅಭ್ಯರ್ಥಿ ಗಳ ಸಂಖ್ಯೆ | ಪ್ರಕಟ ಗೊಂಡ ದಿನಾಂಕ | ಅಭ್ಯರ್ಥಿ ಗಳ ಸಂಖ್ಯೆ | ದಿನಾಂಕ | ಅಭ್ಯರ್ಥಿ ಗಳ ಸಂಖ್ಯೆ | ದಿನಾಂಕ | ಅಭ್ಯರ್ಥಿ ಗಳ ಸಂಖ್ಯೆ | |
| 1. | 17.02.2018 | 910 | 26.02.2018 | 905 | 27.02.2018 | 903 | - | - | 02 ಅಭ್ಯರ್ಥಿಗಳ ನೇಮಕಾತಿ ಆದೇಶ ತಡೆಹಿಡಿಯಲಾಗಿದೆ |
| 2. | 23.02.2018 | 49 | 06.03.2018 | 48 | 06.03.2018 | 48 | - | - | 905+48= 953 |
| 3. | 06.03.2018 | 19 | 13.03.2018 | 18 | 13.03.2018 | 18 | - | - | 953+18= 971 |

| ಕ್ರ ಸಂ | ತಾತ್ಕಾಲಿಕ ಪಟ್ಟಿ | | ಅಂತಿಮ ಪಟ್ಟಿ | | ನೇಮಕಾತಿ ಆದೇಶ ನೀಡಿದ | | ಆಯ್ಕೆ ಮತ್ತು ನೇಮಕಾತಿ ರದ್ದುಪಡಿಸಿದ | | ಷರಾ |
|---|---|---|---|---|---|---|---|---|---|
| | ಪ್ರಕಟ ಗೊಂಡ ದಿನಾಂಕ | ಅಭ್ಯರ್ಥಿ ಗಳ ಸಂಖ್ಯೆ | ಪ್ರಕಟ ಗೊಂಡ ದಿನಾಂಕ | ಅಭ್ಯರ್ಥಿ ಗಳ ಸಂಖ್ಯೆ | ದಿನಾಂಕ | ಅಭ್ಯರ್ಥಿ ಗಳ ಸಂಖ್ಯೆ | ದಿನಾಂಕ | ಅಭ್ಯರ್ಥಿ ಗಳ ಸಂಖ್ಯೆ | |
| 4. | 02.07.2018 | 23 | 25.09.2018 | 23 | - | - | - | - | |
| 5. | - | - | - | - | - | - | - | - | 971+23=994 |
| 6. | | | | | | | 02.07.2018 | 118 | 994-118= 876 |
| | 24.09.2018 | 145 | 05.10.2018 | 138 | 05.10.2018 | 163 | - | - | 876+138= 1014 (ಕ್ರ.ಸಂ: 01 ರಂತೆ ನೇಮಕಾತಿ ಆದೇಶ ತಡೆಹಿಡಿಯಲಾಗಿದ್ದ 02 ಅಭ್ಯರ್ಥಿಗಳಿಗೆ ನೇಮಕಾತಿ ಆದೇಶ ನೀಡಿದ. |
| 7. | - | - | - | - | | | | | |
| 8. | - | - | - | - | - | - | 23.10.2018 | 01 | 1014-01= 1013 |
| | | | | - | - | - | 23.05.2019 | 27 | 1013-27= 986 (ಬಾಕಿ ಉಳಿದ ಬಿಂದು 81 ಸೇರಿದರೆ 1067) |

ಸರ್ಕಾರದ ಉಲ್ಲೇಖ (1) ರ ಸುತ್ತೋಲೆಯಲ್ಲಿ ಆಯ್ಕೆ ಪಟ್ಟಿ ಜಾರಿಯಲ್ಲಿರುವ ಅವಧಿಯು 01 ವರ್ಷವಾಗಿರುತ್ತದೆ. ಆದುದರಿಂದ ನೇಮಕಾತಿ ಆದೇಶವನ್ನು ಆಯ್ಕೆಪಟ್ಟಿ ಪ್ರಕಟಗೊಂಡ 01 ವರ್ಷದ ಒಳಗಾಗಿ ನೀಡಲು ಕ್ರಮ ಕೈಗೊಳ್ಳಬೇಕಾಗಿ ತಿಳಿಸಿದೆ. ಈ ನೇಮಕಾತಿ ಪ್ರಕ್ರಿಯೆಯಲ್ಲಿ ಆಯ್ಕೆ ಪಟ್ಟಿ ಪ್ರಕಟಿಸಿದ 01 ವರ್ಷದ ಒಳಗಾಗಿ ನೇಮಕಾತಿ ಆದೇಶಥವನ್ನು ನೀಡಲಾಗಿದೆ. ಆದರೆ ಆಯ್ಕೆಪಟ್ಟಿಯನ್ನು ಹಂತ ಹಂತವಾಗಿ ಪ್ರಕಟಿಸಿದ ಕಾರಣ ಹಂತ ಹಂತವಾಗಿ ನೇಮಕಾತಿ ಆದೇಶವನ್ನು ನೀಡಿ ಅಭ್ಯರ್ಥಿಗಳನ್ನು ವೃತ್ತಿ ಬುನಾದಿ ತರಬೇತಿಗೆ ನೇಮಿಸಲಾಗಿದೆ. ಈ ನೇಮಕಾತಿಯಲ್ಲಿ ದಿನಾಂಕ: 17.02.2018 ರಿಂದ ಆಯ್ಕೆ ಪಟ್ಟಿ ಪ್ರಕಟಿಸುವ ಕ್ರಮವು ಜಾರಿಯಲ್ಲಿರುತ್ತದೆ. ಹೀಗಾಗಿ 01 ವರ್ಷಕ್ಕೂ ಮೇಲ್ಪಟ್ಟು ಆಯ್ಕೆ ಪಟ್ಟಿ ಪ್ರಕಟಿಸಿ ನೇಮಕಾತಿ ಆದೇಶ ನೀಡುವ ಕ್ರಮವು ಜಾರಿಯಲ್ಲಿದ್ದರೂ ಇನ್ನೂ ಮುಖ್ಯ ಪಟ್ಟಿಯನ್ನು ಪೂರ್ಣವಾಗಿ ಪ್ರಕಟಿಸಲಾಗಿರುವುದಿಲ್ಲ. ಈ ನೇಮಕಾತಿಯಲ್ಲಿ 01 ವರ್ಷ ಮೇಲ್ಪಟ್ಟಿದ್ದರೂ ನೇಮಕಾತಿ ಪ್ರಕ್ರಿಯೆಯನ್ನು ಪೂರ್ಣಗೊಳಿಸಲು ನಿಯಮಗಳಲ್ಲಿ ಅವಕಾಶ ಇರುವ ಕುರಿತು ಸ್ಪಷ್ಟೀಕರಣವನ್ನು ಅಥವಾ ಅವಧಿ ಮೀರಿದ ನಂತರವೂ ನೇಮಕಾತಿ ಪ್ರಕ್ರಿಯೆಯನ್ನು ಪೂರ್ಣಗೊಳಿಸಲು ವಿಶೇಷ ಪ್ರಕರಣವೆಂದು ಸರ್ಕಾರದ ಅನುಮೋದನೆ ನೀಡಬೇಕೆಂದು ಉಲ್ಲೇಖ (2)ರ ಪತ್ರದಲ್ಲಿ ಕೋರಲಾಗಿತ್ತು.

ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ನೇಮಕಾತಿ ಅಧಿಸೂಚನೆಯು ಪ್ರಕಟಿಸಿದ ಸಂದರ್ಭದಲ್ಲಿ ಚಾಲ್ತಿಯಲ್ಲಿದ್ದ ನಿಯಮಾವಳಿಯಂತೆ ಆಯ್ಕೆ ಪ್ರಕ್ರಿಯೆಯನ್ನು ನಡೆಸಬೇಕಾಗಿರುವುದರಿಂದ ಕರ್ನಾಟಕ ನಾಗರೀಕ (ಸ್ಪರ್ಧಾತ್ಮಕ ಪರೀಕ್ಷೆ ಮೂಲಕ ನೇರ ನೇಮಕಾತಿ ಮತ್ತು ಆಯ್ಕೆ) (ಸಾಮಾನ್ಯ) ನಿಯಮಾವಳಿ 2006 ರ ನಿಯಮ 8 ರಲ್ಲಿ ಮುಖ್ಯ ಮತ್ತು ಹೆಚ್ಚುವರಿ ಆಯ್ಕೆ ಪಟ್ಟಿಯನ್ನು ಆಯ್ಕೆ ಪ್ರಾಧಿಕಾರವು ಏಕಕಾಲದಲ್ಲಿಯೇ ಪ್ರಕಟಿಸಬೇಕಾಗಿರುತ್ತದೆ. ಮುಖ್ಯ ಪಟ್ಟಿ ಪ್ರಕಟಿಸಿದ ದಿನಾಂಕದಿಂದ ಒಂದು ವರ್ಷದವರೆಗೆ ಮುಖ್ಯ ಪಟ್ಟಿಯು ಒಂದೂವರ ವರ್ಷದವರೆಗೆ ಹೆಚ್ಚುವರಿ ಪಟ್ಟಿಯು ಚಾಲ್ತಿಯಲ್ಲಿರುತ್ತದೆಯೆಂದು ತಿಳಿಸಿದೆ. ಈ ನೇಮಕಾತಿ ಪ್ರಕ್ರಿಯೆಯಲ್ಲಿ ಈ ರೀತಿಯ ಕ್ರಮ ಕೈಗೊಂಡಿರುವುದಿಲ್ಲವೆಂದು ತಿಳಿಸಿ, ಅವಧಿಯನ್ನು ವಿಸ್ತರಿಸಿ ನೇಮಕಾತಿ ಪ್ರಕ್ರಿಯೆಯನ್ನು ಮುಂದುವರೆಸಲು ನಿಯಮಗಳಲ್ಲಿ ಅವಕಾಶವಿರುವುದಿಲ್ಲವೆಂದು ಉಲ್ಲೇಖ (3)ರ ಪತ್ರದಲ್ಲಿ ತಿಳಿಸಿದೆ.

ನೇಮಕಾತಿ ಪ್ರಕ್ರಿಯೆಯ ವಿಳಂಬದ ಕ್ರಮವನ್ನು ಪ್ರಶ್ನಿಸಿ ಮಾನ್ಯ ಕರ್ನಾಟಕ ಆಡಳಿತ ನ್ಯಾಯ ಮಂಡಳಿ, ಬೆಂಗಳೂರು ರವರಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಸದರಿ ಪ್ರಕರಣಗಳ ಉಲ್ಲೇಖ (4) ರ ಅಂತಿಮ ಆದೇಶದಲ್ಲಿ ಅಭ್ಯರ್ಥಿಗಳ ಮನವಿಯನ್ನು ಪರಿಶೀಲಿಸಿ ನಿಯಮಾನುಸಾರ ಕ್ರಮವನ್ನು ಮೂರು ತಿಂಗಳೊಳಗಾಗಿ ಜರುಗಿಸಲು ಸೂಚಿಸಿದೆ. ಅದರಂತೆ ಸ್ವೀಕೃತವಾದ ಉಲ್ಲೇಖ (5) ರ ಮನವಿಗಳನ್ನು ಈ ಪತ್ರದೊಂದಿಗೆ ಲಗತ್ತಿಟ್ಟು ಸಲ್ಲಿಸಿದೆ.

ಉಲ್ಲೇಖ (6) ಮತ್ತು (7)ರ ಸರ್ಕಾರದ ಪತ್ರದೊಂದಿಗೆ ಸ್ವೀಕೃತವಾದ ಮಾನ್ಯ ಆಹಾರ ಮತ್ತು ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಸಚಿವರ ಟಿಪ್ಪಣಿ ಹಾಗೂ ಶ್ರೀ ಬಸವರಾಜ ಹೊರಟ್ಟಿ, ವಿಧಾನ ಪರಿಷತ್ ಸದಸ್ಯರು ಹಾಗೂ ಹಾಲಿ ವಿಧಾನ ಪರಿಷತ್ತಿನ ಸಭಾಪತಿರವರ ಪತ್ರಗಳಲ್ಲಿ ಕುಮಾರಿ: ಶೀಫಾ ಶಹಜಾನ ಎರಿಮನಿ ರವರು ಭೂಮಾಪಕರ ಹುದ್ದೆಗೆ ಆಯ್ಕೆಯಾಗಿದ್ದು, ಮೆರಿಟ್ ನಲ್ಲಿದ್ದರೂ ಸಿಂಧುತ್ವ ಪ್ರಮಾಣ ಪತ್ರ ಹಾಗೂ ಪೊಲೀಸ್ ವರದಿ ತಡವಾಗಿರುವುದಾಗಿ ಕಾರಣ ನೀಡಿ. ನೇಮಕಾತಿ ಆದೇಶ ನೀಡದೆ ಇರುವ ಆದೇಶವನ್ನು ಹಿಂಪಡೆದು ನೇಮಕಾತಿ ಆದೇಶವನ್ನು ನೀಡುವ ಸಂಬಂಧ ಕೋರಿರುತ್ತಾರೆ.

ಈ ಮೇಲಿನ ಎಲ್ಲಾ ಅಂಶಗಳನ್ನು ಸರ್ಕಾರದ ಅವಗಾಹನೆಗೆ ಸಲ್ಲಿಸುತ್ತಾ, ಈ ನೇಮಕಾತಿ ಪ್ರಕ್ರಿಯೆಯಲ್ಲಿ ವಿಳಂಬವಾಗಿರುವುದಕ್ಕೆ ಅಭ್ಯರ್ಥಿಗಳು ಕಾರಣರಾಗಿರುವುದಿಲ್ಲ ಹಾಗೂ ಈ ಅಭ್ಯರ್ಥಿಗಳಿಗಿಂತ Rank ನಂತೆ ಕಿರಿಯವರಾಗಿದ್ದು ಅವರಿಗೆ ಸಂಬಂಧಿಸಿದ್ದ ಅಗತ್ಯ ದಾಖಲೆಗಳು ಇತರ ಪ್ರಾಧಿಕಾರಗಳಿಂದ ನಿಗದಿತ ಸಮಯದಲ್ಲಿ ಸ್ವೀಕೃತಿಯಾದ ಕಾರಣದಿಂದ ಅವರುಗಳ ಆಯ್ಕೆ ಪ್ರಕಟಿಸಿ ನೇಮಕಾತಿ ಆದೇಶವನ್ನು ಸಹ ನೀಡಲಾಗಿದೆ. ಆದರೆ ಆಯ್ಕೆ ಪಟ್ಟಿ ಪ್ರಕಟಿಸದೆ ಬಾಕಿ ಉಳಿದಿರುವ ಅಭ್ಯರ್ಥಿಗಳ ದಾಖಲೆಗಳು ಸ್ವೀಕೃತವಾಗುವಲ್ಲಿ ವಿಳಂಬವಾದ ಕಾರಣದಿಂದ Rank ನಂತೆ ಹಿರಿಯವರಾಗಿದ್ದು ನೇಮಕಾತಿಗೆ ಪರಿಗಣಿಸದೆ ಇರುವುದರಿಂದ ಸಮಾನ ನ್ಯಾಯ ನೀಡಿದಂತಾಗುವುದಿಲ್ಲ. ಆದ ಕಾರಣ ನೇಮಕಾತಿ ಪ್ರಕ್ರಿಯೆಯಲ್ಲಿ ಅಗತ್ಯ ದಾಖಲೆಗಳನ್ನು ಸ್ವೀಕರಿಸಿ ಆಯ್ಕೆ ಪ್ರಕಟಿಸದ 38 ಅಭ್ಯರ್ಥಿಗಳಿಗೆ ವಿಶೇಷ ಪ್ರಕರಣವೆಂದು ಪರಿಗಣಿಸಿ ಭೂಮಾಪಕರ ಹುದ್ದೆಯ ನೇಮಕಾತಿ ಆದೇಶ ನೀಡುವ ಕುರಿತು ಕ್ರಮ ಕೈಗೊಳ್ಳಲು ಸರ್ಕಾರದ ಅನುಮೋದನೆ ನೀಡಬೇಕೆಂದು ಕೋರಿದೆ.

ತಮ್ಮ ವಿಶ್ವಾಸಿ,

(ಟಿ.ರವೀಂದ್ರಪ್ಪ)

ಜಂಟಿ ನಿರ್ದೇಶಕರು (ಆಡಳಿತ)

(ಕಛೇರಿ ಟಿಪ್ಪಣಿ

ಆದೇಶದ ಮೇರೆಗೆ)

ಅನುಬಂಧ -2

## ಭೂಮಾಪಕರ ಹುದ್ದೆಗೆ ನೇಮಕಾತಿ ಆದೇಶ ನೀಡಬೇಕಾಗಿರುವ ಅಭ್ಯರ್ಥಿಗಳ ವಿವರ

| Sl. No | Application No | Applicant Name | Date Of Birth | Gender | Applied Category | | | | | | RANK | Selection Reservation | |
|---|---|---|---|---|---|---|---|---|---|---|---|---|---|
| | | | | | Category | RL | KM | PDP | PH | XD | | Reservation Category | Horizontal Reservation |
| 1 | SSLR10014990 | VENKATA SAI S N | 20-06-1995 | MALE | Cat-3A | NO | NO | NO | NO | NO | 446 | 3A | OTH |
| 2 | SSLR10012823 | RAVI KUMAR | 01-06-1984 | MALE | Cat-3B | YES | YES | NO | NO | NO | 503 | GM | RL |
| 3 | SSLR10005135 | POOJITH G N | 12-09-1993 | MALE | Cat-3A | NO | NO | NO | NO | NO | 588 | GM | OTH |
| 4 | SSLR10017534 | VARUN P L | 16-05-1995 | MALE | General | YES | NO | NO | NO | NO | 608 | GM | RL |
| 5 | SSLR10026536 | MALLIKARJUN BIRADAR | 25-10-1995 | MALE | Cat-3B | YES | YES | NO | NO | NO | 610 | 3B | RL |
| 6 | SSLR10023728 | NAVEEN KUANARA VALI | 18-09-1996 | MALE | Cat-3B | NO | NO | NO | NO | NO | 612 | 3B | OTH |
| 7 | SSLR10009547 | KIRAN N | 16-03-1997 | MALE | Cat-3A | NO | NO | NO | NO | NO | 614 | 3A | OTH |
| 8 | SSLR10020183 | MAHENDRA PATIL | 12-05-1997 | MALE | Cat-3B | NO | YES | NO | NO | NO | 615 | 3B | OTH |
| 9 | SSLR10022615 | MANJUNATH VISHWANATH MAGDUM | 10-08-1997 | MALE | Cat-3B | YES | NO | NO | NO | NO | 616 | 3B | RL |
| 10 | SSLR10003180 | HARIPRASAD RAJENDRA KHASANIS | 10-06-1998 | MALE | General | NO | NO | NO | NO | NO | 617 | GM | OTH |
| 11 | SSLR10009432 | BHIMASHANKAR KAVATAGI | 22-07-1988 | MALE | Cat-3B | YES | YES | NO | NO | NO | 623 | GM | RL |
| 12 | SSLR10009700 | SHRINIVAS IRAPPA KALLI | 01-05-1989 | MALE | Cat-3B | YES | YES | NO | NO | NO | 625 | GM | RL |
| 13 | SSLR10002932 | NARAYAN PARASHURAM BEDASAGAON | 16-03-1990 | MALE | Cat-3B | YES | YES | NO | NO | NO | 628 | GM | RL |
| 14 | SSLR10015576 | NARENDRA KUMAR S C | 30-05-1990 | MALE | Cat-3B | NO | NO | NO | NO | NO | 630 | GM | OTH |
| 15 | SSLR10022633 | ANAND VANAGERI | 04-01-1991 | MALE | Cat-3B | NO | YES | NO | NO | NO | 631 | GM | KM |
| 16 | SSLR10001195 | KIRAN C | 10-07-1991 | MALE | Cat-3A | NO | NO | NO | NO | NO | 635 | GM. | OTH |
| 17 | SSLR10002247 | MAHADEVASWAMY H D | 31-07-1991 | MALE | Cat-1 | YES | YES | NO | NO | NO | 687 | Cat-1 | RL |
| 18 | SSLR10009586 | M VIDYANAND | 05-09-1994 | MALE | ST | YES | YES | NO | NO | NO | 724 | ST | RL |
| 19 | SSLR10002237 | LOKESHA S T | 02-07-1990 | MALE | Cat-2A | YES | YES | NO | NO | NO | 887 | 2A | OTH |
| 20 | SSLR10019248 | AJEET MUGGANAVAR | 01-06-1988 | MALE | Cat-3B | YES | YES | YES | NO | NO | 1155 | GM | PDP |
| 21 | SSLR10005231 | SACHIN SANGANNA METI | 06-09-1992 | MALE | General | NO | NO | YES | NO | NO | 1303 | GM | PDP |
| 22 | SSLR10021654 | PARASHURAMA N | 09-08-1995 | MALE | ST | YES | YES | NO | NO | NO | 1344 | ST | RL |

| Sl. No | Application No | Applicant Name | Date Of Birth | Gender | Applied Category | | | | | | RANK | Selection Reservation | |
|---|---|---|---|---|---|---|---|---|---|---|---|---|---|
| | | | | | Category | RL | KM | PDP | PH | XD | | Resevervati on Cate gory | Horizontal Resevervati on |
| 23 | SSLR10006471 | ABDULGAPAR HAMMASAGAR | 29-09-1992 | MALE | Cat-2B | NO | YES | NO | NO | NO | 1408 | 2B | KM |
| 24 | SSLR10004523 | JANGALI SAB K | 08-06-1993 | MALE | Cat-2B | NO | YES | NO | NO | NO | 1538 | 2B | OTH |
| 25 | SSLR10022141 | SHRINIDHI M P | 28-10-1998 | FEMALE | Cat-3A | YES | YES | NO | NO | NO | 2164 | GM | F |
| 26 | SSLR10022211 | PADMAVATI | 23-08-1988 | FEMALE | Cat-3B | NO. | YES | NO | NO | NO | 2179 | 3B | F |
| 27 | SSLR10003247 | SHIFA TERIMANI | 21-09-1992 | FEMALE | Cat-1 | NO | NO | NO | NO | NO | 2219 | Cat-1 | F |
| 28 | SSLR10016776 | M AKSHATHA | 07-06-1994 | FEMALE | Cat-3A | NO | NO | NO | NO | NO | 2254 | GM | F |
| 29 | SSLR10014373 | MAITRA MALLIKARJUNRADDI GUNJALA | 25-06-1995 | FEMALE | Cat-3A | YES | NO | NO | NO | NO | 2270 | GM | F |
| 30 | SSLR10007012 | TRIVENI DHANAPPA PANDRE | 02-07-1998 | FEMALE | Cat-2A | YES | YES | NO | NO | NO | 2467 | 2A | F |
| 31 | SSLR10009115 | SHRUTI | 31-07-1996 | FEMALE | SC | NO | NO | NO | NO | NO | 4772 | SC | F |
| 32 | SSLR10023873 | POOJA SHRIKANT HAVANUR | 04-01-1994 | FEMALE | SC | NO | NO | NO | NO | NO | 4967 | SC | F |
| 33 | SSLR10015773 | NAGARAJ J S | 18-02-1992 | MALE | General | YES | YES | NO | YES | NO | 7585 | GM | PH |
| 34 | SSLR10014890 | SURESH BELLAD | 04-03-1979 | MALE | Cat-3A | YES | YES | NO | YES | NO | 10968 | GM | PH |
| 35 | SSLR10005461 | BHEEMANNA G | 20-06-1995 | MALE | ST | YES | YES | NO | YES | NO | 11827 | GM | PH |
| 36 | SSLR10014016 | NAGMA A H | 20-05-1994 | FEMALE | Cat-1 | NO | NO | NO | YES | NO | 14366 | GM | PH |
| 37 | SSLR10013550 | CHANDRASHEKARAIAH K | 10-06-1969 | MALE | Cat-2A | YES | YES | NO | YES | NO | 15031 | GM | PH |
| 38 | SSLR10022370 | PRAKASH KUMAR C K | 10-06-1979 | MALE | Cat-2A | NO | NO | NO | YES | NO | 16077 | GM | PH |

Commissioner
Survey Settlement and Land Records
Bangalore

10/8/21